ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | 1122(1691) |
| ಸದಸ್ಯರ ಹೆಸರು | ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | 18.03.2020 |
| ಉತ್ತರಿಸುವ ಸಚಿವರು | ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರವಾರ ಜಿಲ್ಲೆಯ ಕಾರವಾರ ಪಟ್ಟಣದಲ್ಲಿ ಸಾಗರಮಾಲಾ ಯೋಜನೆಯ ತಡೆಗೋಡೆ ನಿರ್ಮಾಣ ಕಾಮಗಾರಿ ಸ್ಥಗಿತಗೊಳಿಸಲು ಸಮಗ್ರ ಮೀನುಗಾರರು ಹಾಗೂ ಪಟ್ಟಣದ ಸಾರ್ವಜನಿಕರು ದೊಡ್ಡ ಪ್ರಮಾಣದಲ್ಲಿ ಪ್ರತಿಭಟನೆ ಮಾಡಿದ್ದು ಸರ್ಕಾರದ ಗಮನಕ್ಕೆ ಬಂದಿರುತ್ತದೆಯೇ; (ವಿವರ ನೀಡುವುದು) | ಹೌದು.<br><br>• ಕಾರವಾರ ಬಂದರಿನ ಎರಡನೇ ಹಂತದ ಅಭಿವೃದ್ಧಿ ಕುರಿತು ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ರವರು ದಿನಾಂಕ: 06.12.2019 ರಂದು ಕಾರವಾರದ ಸ್ಥಳೀಯ ಮೀನುಗಾರರು ಮತ್ತು ಮೀನುಗಾರರ ಮುಖಂಡರೊಂದಿಗೆ ಸಭೆ ನಡೆಸಿರುತ್ತಾರೆ.<br><br>• ಸಾಗರಮಾಲಾ ಯೋಜನೆಯಡಿ ಕಾರವಾರ ಬಂದರಿನ ಎರಡನೇ ಹಂತದ ಅಭಿವೃದ್ಧಿ ಕೈಗೊಳ್ಳುತ್ತಿರುವ ಕುರಿತು ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು, ಉತ್ತರ ಕನ್ನಡ ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ದಿನಾಂಕ:24.12.2019 ರಂದು ಶಾಸಕರು, ಜನಪ್ರತಿನಿಧಿಗಳು, ಸ್ಥಳೀಯ ಮೀನುಗಾರಿಕೆ ಸಂಘ ಸಂಸ್ಥೆಗಳ ಮುಖಂಡರು ಹಾಗೂ ಕಾರವಾರದ ಮೀನುಗಾರರೊಂದಿಗೆ ಸಭೆ ನಡೆಸಿರುತ್ತಾರೆ.<br><br>• ಕಾರವಾರದ ಸ್ಥಳೀಯ ಮೀನುಗಾರರು ದಿನಾಂಕ: 13.01.2020 ರಿಂದ 24.01.2020 ರವರೆಗೆ ಜಿಲ್ಲಾಧಿಕಾರಿಗಳ ಕಚೇರಿ ಬಳಿ ಮುಷ್ಕರ ಮಾಡಿರುವ ಬಗ್ಗೆ ದಿನ ಪತ್ರಿಕೆಗಳಲ್ಲಿ ವರದಿಯಾಗಿರುತ್ತದೆ.<br><br>• ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಕಾರವಾರ |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ಬಂದರಿನ ಎರಡನೇ ಹಂತದ ಅಭಿವೃದ್ಧಿ ಕುರಿತು ಜಿಲ್ಲಾಧಿಕಾರಿಗಳು, ಶಾಸಕರು, ಅಧಿಕಾರಿಗಳು, ಕಾರವಾರದ ಮೀನುಗಾರರ ಮುಖಂಡರೊಂದಿಗೆ ಬೆಂಗಳೂರಿನಲ್ಲಿ ದಿನಾಂಕ: 31.01.2020 ರಂದು ಸಭೆ ನಡೆಸಲು ತೀರ್ಮಾನಿಸಿದ್ದರು, ಈ ಮಧ್ಯೆ ಕಾರವಾರ ಬಂದರಿನ ಎರಡನೇ ಹಂತದ ಅಭಿವೃದ್ಧಿ ಕಾಮಗಾರಿ ಕೈಗೊಳ್ಳುವುದನ್ನು ಹಾಗೂ ಈಗಾಗಲೇ ಪ್ರಾರಂಭಿಸಲಾಗಿರುವ ಕಾರವಾರ ಬಂದರಿನ ಉತ್ತರ ದಿಕ್ಕಿನ 880 ಮೀ. ಉದ್ದದ ಅಲೆ ತಡೆಗೋಡೆ ನಿರ್ಮಾಣ ಕಾಮಗಾರಿಯನ್ನು ವಿರೋಧಿಸಿ, ಕಾರವಾರ ತಾಲ್ಲೂಕಿನ ಬೈತ್‌ಖೋಲ್ ಬಂದರು ನಿರಾಶ್ರಿತರ ಯಾಂತ್ರೀಕೃತ ದೋಣಿ ಮೀನುಗಾರರ ಸಹಕಾರ ಸಂಘ ನಿಯಮಿತ, ಬೈತ್‌ಖೋಲ್ ರವರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಪೀಠದಲ್ಲಿ ರಿಟ್ ಪಿಟಿಷನ್ ನಂ. 1332/2020 ರಂತೆ ಸಾರ್ವಜನಿಕ ಹಿತಾಸಕ್ತಿ ಪ್ರಕರಣ ದಾಖಲಿಸಿದ್ದು, ಪ್ರಕರಣವು ನ್ಯಾಯಾಲಯದಲ್ಲಿರುತ್ತದೆ. ದಿನಾಂಕ:31.01.2020 ರ ಸಭೆಯನ್ನು ಕಾರಣಾಂತರದಿಂದ ಮುಂದೂಡಲಾಗಿರುತ್ತದೆ. |
| ಆ) | ಸಾಗರಮಾಲಾ ಯೋಜನೆಯಿಂದ ಯಾವುದೇ ಮೀನುಗಾರರಿಗೆ ಉಪಯೋಗವಿಲ್ಲದೇ ಇರುವುದು ಹಾಗೂ ಈ ಯೋಜನೆಯ ನಿರ್ಮಾಣದಿಂದಾಗಿ ಮೀನುಗಾರರ ಬದುಕು ದುಸ್ಥಿತಿಯಲ್ಲಿರುವುದರಿಂದ ಸದರಿ ಯೋಜನೆಯನ್ನು ಕೂಡಲೇ ಸ್ಥಗಿತಗೊಳಿಸಲಾಗುವುದೇ? (ವರದಿ ನೀಡುವುದು) | • ಕಾರವಾರ ಬಂದರು ರಾಜ್ಯದಲ್ಲಿ ಅಂತರ್ ರಾಷ್ಟ್ರೀಯ ಹಡಗುಗಳು ನೇರವಾಗಿ ಧಕ್ಕೆಯಲ್ಲಿ ತಂಗುವ ಅವಕಾಶವನ್ನು ಹೊಂದಿರುವ ರಾಜ್ಯ ಸರ್ಕಾರದ ಅಧೀನದಲ್ಲಿರುವ ಏಕಮೇವ ಬಂದರಾಗಿರುತ್ತದೆ. ಕಾರವಾರ ಬಂದರು ಎಲ್ಲಾ ಸರಕುಗಳ ಆಮದು/ ರಫ್ತಿಗೆ ಸರ್ವಋತು ಬಂದರಾಗಿ ಕೇಂದ್ರ ಸರ್ಕಾರದಿಂದ ಘೋಷಿಸಲ್ಪಟ್ಟಿದೆ. ಪ್ರಸಕ್ತ ರಾಜ್ಯ ಸರ್ಕಾರದ ಅನುದಾನದಲ್ಲಿ ಕಾರವಾರ ಬಂದರಿನಲ್ಲಿ ದಕ್ಷಿಣಕ್ಕೆ 250 ಮೀ ಉದ್ದದ ಅಲೆತಡೆಗೋಡೆಯೊಂದಿಗೆ 516 ಮೀಟರ್ ಉದ್ದದ ಜೆಟ್ಟಿಯಲ್ಲಿ 3 ಹಡಗುಗಳು ಏಕಕಾಲದಲ್ಲಿ ತಂಗಬಹುದಾದ ಸೌಲಭ್ಯ ಇರುತ್ತದೆ. ಇದರೊಂದಿಗೆ ಇತರ ಪೂರಕ ಸೌಲಭ್ಯಗಳನ್ನು ಅಭಿವೃದ್ಧಿ ಪಡಿಸಲಾಗಿರುತ್ತದೆ.<br><br>• ಹಾಲಿ ಕಾರವಾರ ಬಂದರು 516 ಮೀ ಉದ್ದದ ಧಕ್ಕೆಯನ್ನು ಹೊಂದಿದ್ದು ಪ್ರಸಕ್ತ ಅಧಿಕ ಪ್ರಮಾಣದ ಸರಕು ಹೊರುವ ಸಾಮರ್ಥ್ಯದ ಬೃಹತ್ ಗಾತ್ರದ ಹಡಗುಗಳು ಏಕ ಕಾಲದಲ್ಲಿ ಕಾರವಾರ ಬಂದರಿಗೆ ಬಂದಲ್ಲಿ ಹಡಗುಗಳ ನಿಲುಗಡೆಗೆ ಸ್ಥಳದ ಅಭಾವವಿದ್ದು ಪ್ರಸಕ್ತ ಸಮುದ್ರದಿಂದ ಬಂದರಿಗೆ ಬರುವ ಚಾನೆಲ್‌ನಲ್ಲಿ ಉತ್ತರ ದಿಕ್ಕಿನಿಂದ ಬರುವ ಹೂಳು ತುಂಬುತ್ತಿರುವುದರಿಂದ ಯೋಜಿತ ಆಳವಾದ-9 ಮೀ ಆಳ |

| ಕ್ರ. ಸಂ. | ಪ್ರಶ್ನೆ | ಉತ್ತರ |
| --- | --- | --- |
| | | ಹೊಂದಿರುವ ಸರಕು ಹಡಗುಗಳು ಬರಲು ಸಾಧ್ಯವಾಗುತ್ತಿಲ್ಲ. ಈ ಕಾರಣಕ್ಕಾಗಿ ಬಂದರು ಪ್ರದೇಶ ಮತ್ತು ಚಾನೆಲ್‌ನಲ್ಲಿ ಹೂಳು ತುಂಬುವುದನ್ನು ತಪ್ಪಿಸಲು ಬಂದರಿನ ಉತ್ತರ ದಿಕ್ಕಿನಲ್ಲಿ 1160 ಮೀ ಉದ್ದದ ಅಲೆತಡೆಗೋಡೆ ನಿರ್ಮಾಣ ಅತೀ ಅವಶ್ಯವಿರುತ್ತದೆ.<br>• ಸಾಗರಮಾಲಾ ಯೋಜನೆಯಡಿ ಪ್ರಸಕ್ತ ಕಾರವಾರ ಬಂದರಿನ ಉತ್ತರಕ್ಕೆ ರೂ.215.00 ಕೋಟಿ ವೆಚ್ಚದಲ್ಲಿ 1160 ಮೀ. ಉದ್ದದ ಬ್ರೇಕ್‌ವಾಟರ್ ನಿರ್ಮಾಣ ಹಾಗೂ ದಕ್ಷಿಣಕ್ಕೆ ಇರುವ 250 ಮೀ. ಉದ್ದದ ಬ್ರೇಕ್‌ವಾಟರನ್ನು 145 ಮೀ. ಉದ್ದಕ್ಕೆ ವಿಸ್ತರಿಸುವ ಕಾಮಗಾರಿ ಮತ್ತು ರೂ.61.00 ಕೋಟಿ ವೆಚ್ಚದಲ್ಲಿ 250 ಮೀ. ಉದ್ದದ ಕೋಸ್ಟಲ್ ಬರ್ತ್ ನಿರ್ಮಿಸುವ ಯೋಜನೆ ಅನುಮೋದನೆಯಾಗಿರುತ್ತದೆ.<br>• ಕಾರವಾರ ಬಂದರಿನ 1ನೇ ಹಂತದ ಅಭಿವೃದ್ಧಿಯಲ್ಲಿ ರೂ.125 ಕೋಟಿ ಮೊತ್ತದಲ್ಲಿ ಉತ್ತರ ದಿಕ್ಕಿನಲ್ಲಿ 1160 ಮೀ. ಉದ್ದ ಬ್ರೇಕ್‌ವಾಟರ್ ಪೈಕಿ 880 ಮೀ. ಉದ್ದವನ್ನು ನಿರ್ಮಿಸಲಾಗುತ್ತದೆ.<br>• ಕಾರವಾರ ಬಂದರಿನ 2ನೇ ಹಂತದ ಅಭಿವೃದ್ಧಿಯಲ್ಲಿ ರೂ. 90 ಕೋಟಿ ಮೊತ್ತದಲ್ಲಿ ಪ್ರಸಕ್ತ ದಕ್ಷಿಣಕ್ಕೆ ಇರುವ 250 ಮೀ. ಉದ್ದದ ಬ್ರೇಕ್‌ವಾಟರ್‌ನ್ನು 145 ಮೀಟರ್ ಹೆಚ್ಚುವರಿಯಾಗಿ ನಿರ್ಮಿಸಲಾಗುವುದು. ಇದರಿಂದ ನೌಕಾ ಚಟುವಟಿಕೆಗಳಿಗೆ ಪೂರಕವಾಗಿ ಹಡಗುಗಳ ಬರ್ತಿಂಗ್/ ಅನ್‌ಬರ್ತಿಂಗ್‌ಗೆ ಹೆಚ್ಚುವರಿ ಸುರಕ್ಷತೆಯನ್ನು ಒದಗಿಸುತ್ತದೆ.<br>• ಅಲೆತಡೆಗೋಡೆ ನಿರ್ಮಾಣದಿಂದ ನೌಕಾ ಚಲನವಲನಕ್ಕೆ ಹೆಚ್ಚಿನ ಸುರಕ್ಷೆಯನ್ನು ಒದಗಿಸುವುದರಿಂದ ಬಂದರು ಚಟುವಟಿಕೆ ಹೆಚ್ಚಾಗಿ ಸರ್ಕಾರಕ್ಕೆ ಹೆಚ್ಚಿನ ಆದಾಯ ಬರುವುದರ ಜೊತೆಗೆ ಹೂಳೆತ್ತುವಿಕೆಗಾಗಿ ಸರ್ಕಾರ ಮಾಡುವ ವೆಚ್ಚದಲ್ಲಿ ಗಣನೀಯವಾಗಿ ಉಳಿತಾಯವಾಗಲಿದೆ. ಈ ಯೋಜನೆಯಿಂದ ನೌಕಾ ಚಟುವಟಿಕೆಗಳು ಹೆಚ್ಚಳವಾಗಿ ಕಾರವಾರ ಬಂದರಿಗೆ ಬರುವ ವಾರ್ಷಿಕ ಆದಾಯವು ರೂ.30 ರಿಂದ 50 ಕೋಟಿ ಆಗಬಹುದೆಂದು ನಿರೀಕ್ಷಿಸಲಾಗಿದೆ.<br>• ಅಲೆತಡೆಗೋಡೆಯ ನಿರ್ಮಾಣದಿಂದ ಕಾರವಾರ ಬಂದರಿನ ಹಾಗೂ ಮೀನುಗಾರಿಕಾ ಬಂದರಿನಲ್ಲಿ ಅಲೆಗಳ ಒತ್ತಡ ಕಡಿಮೆಯಾಗಿ ಶಾಂತ ವಾತಾವರಣ ಸೃಷ್ಟಿಯಾಗುವುದರಿಂದ ಬೋಟುಗಳ ಚಲನವಲನಕ್ಕೆ ಹಾಗೂ ತಂಗುವಿಕೆಗೆ ಅನುಕೂಲವಾಗಲಿದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | • ಅಲೆತಡೆಗೋಡೆಯ ನಿರ್ಮಾಣದಿಂದಾಗಿ ಮೀನುಗಾರಿಕೆ ನಡೆಸುವ ದೋಣಿಗಳಿಗೆ ಸಮುದ್ರದಲ್ಲುಂಟಾಗುವ ನೈಸರ್ಗಿಕ ವೈಪರೀತ್ಯಗಳ ಸಂದರ್ಭದಲ್ಲಿ ಸಹಸ್ರಾರು ದೋಣಿಗಳಿಗೆ ಆಶ್ರಯ ತಾಣವಾಗಿ ಉಪಯೋಗಿಸಬಹುದಾಗಿದೆ. ಇದರಿಂದಾಗಿ ಮೀನುಗಾರಿಕಾ ದೋಣಿಗಳಿಗೆ ಆಗಬಹುದಾದ ಹಾನಿಯನ್ನು ತಪ್ಪಿಸಬಹುದಾಗಿದೆ.<br>• ಕಾರವಾರ ಬಂದರು ಅಭಿವೃದ್ಧಿಗೊಂಡಲ್ಲಿ ಈ ಪ್ರದೇಶದ ಸುತ್ತಲಿನ ಜನರಿಗೆ ಉದ್ಯೋಗವಕಾಶಗಳು ದೊರೆಯುವುದರ ಜೊತೆಗೆ ಕೈಗಾರಿಕಾ ಹಾಗೂ ವಾಣಿಜ್ಯ ಉದ್ಯಮಗಳ ಬೆಳವಣಿಗೆಗೆ ಅನುಕೂಲವಾಗಲಿದೆ.<br>• ಮೀನುಗಾರಿಕೆಯ ಉತ್ಪನ್ನಗಳು, ಮೀನುಗಳು, ಸಿಗಡಿ ಮತ್ತು ಮೀನುಗಾರಿಕೆ ಆಧಾರಿತ ಆಹಾರೋತ್ಪನ್ನಗಳ ಆಮದು-ರಫ್ತು ನಡೆಸುವ ಅವಕಾಶಗಳು ವಿಫುಲವಾಗುತ್ತವೆ. ಅಲೆತಡೆಗೋಡೆಯ ನಿರ್ಮಾಣದಿಂದ ಸ್ಥಳೀಯ ಪ್ರವಾಸೋದ್ಯಮ ಬೆಳವಣಿಗೆಗೆ ಉತ್ತೇಜನಕಾರಿಯಾಗುವುದರ ಜೊತೆಗೆ ಹಲವಾರು ರೀತಿಯ ಉದ್ಯೋಗಾವಕಾಶಗಳು ಸೃಷ್ಟಿಯಾಗುತ್ತವೆ.<br>• ವಾಣಿಜ್ಯಾತ್ಮಕ ಬಂದರು ಅಭಿವೃದ್ಧಿಯಿಂದ ಮೀನುಗಾರರಿಗೆ ಯಾವುದೇ ರೀತಿ ತೊಂದರೆಯಾಗುವುದಿಲ್ಲ. ಬದಲಾಗಿ ಹೆಚ್ಚಿನ ಆಳದ ಎಲ್ಲಾ ಸೌಲಭ್ಯಗಳುಳ್ಳ ಬಂದರನ್ನು ನಿರ್ಮಿಸುವುದರಿಂದ ಮೀನುಗಾರಿಕಾ ಚಟುವಟಿಕೆಗಳಿಗೆ ಹಾಗೂ ಮೀನುಗಾರಿಕಾ ಉತ್ಪನಗಳ ರಫ್ತುಗಳಿಗೆ ಅನುಕೂಲವಾಗುತ್ತದೆ.<br>• ಸ್ವಾತಂತ್ರ್ಯ ಪೂರ್ವ ಕಾಲದಿಂದಲೂ ಕಾರವಾರ ಬಂದರು ವಾಣಿಜ್ಯಾತ್ಮಕ ಬಂದರಾಗಿ ಸೇವೆ ಸಲ್ಲಿಸಿದ್ದು ಇರುತ್ತದೆ. ಬಂದರಿನ ಮುಂಭಾಗದಲ್ಲಿ ಈಗಲೂ ಪ್ರತ್ಯೇಕವಾಗಿ ಮೀನುಗಾರಿಕಾ ಬಂದರಿದ್ದು ಇದರಿಂದ ಮೀನುಗಾರರಿಗೆ ಯಾವುದೇ ರೀತಿಯ ತೊಂದರೆ ಉಂಟಾಗುವುದಿಲ್ಲ.<br>• ಕಾರವಾರ ಬಂದರಿನ ಎರಡನೇ ಹಂತದ ಅಭಿವೃದ್ಧಿ ಯೋಜನೆಯನ್ನು ಕಾರ್ಯಗತಗೊಳಿಸುವುದರಿಂದ ಕಾರವಾರ ಹಾಗೂ ಸುತ್ತಲಿನ ಗ್ರಾಮೀಣ ಪ್ರದೇಶಗಳಲ್ಲಿ ಮೀನುಗಾರಿಕೆ ಕುರಿತ ಮೀನು ವ್ಯಾಪಾರ ವಹಿವಾಟು ನಡೆಸುವ ಮೀನುಗಾರ ಮಹಿಳೆಯರಿಗೆ ಯಾವುದೇ ರೀತಿಯ ತೊಂದರೆ ಇರುವುದಿಲ್ಲ. ಕಡಲ ತೀರದಲ್ಲಿ ಮೀನು ಒಣಗಿಸುವ ಕಾರ್ಯ ನಿರ್ವಹಿಸುವ ಮೀನುಗಾರ |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ಮಹಿಳೆಯರಿಗೂ ಈ ಯೋಜನೆಯಿಂದ ಯಾವುದೇ ಬಾಧಕ ಇರುವುದಿಲ್ಲ. ಹಾಲಿ ಇರುವ ಸ್ಥಿತಿಗತಿಗಳೇ ಮುಂದುವರೆಯುವುದು.<br><br>ಪ್ರಸ್ತುತ ಸದರಿ ಸಾಗರಮಾಲಾ ಯೋಜನೆಯಡಿಯಲ್ಲಿ ಕಾರವಾರ ಬಂದರಿನ ಎರಡನೇ ಹಂತದ ಅಭಿವೃದ್ಧಿ ಕಾಮಗಾರಿ ಕೈಗೊಳ್ಳುವುದನ್ನು ಹಾಗೂ ಈಗಾಗಲೇ ಪ್ರಾರಂಭಿಸಲಾಗಿರುವ ಕಾರವಾರ ಬಂದರಿನ ಉತ್ತರ ದಿಕ್ಕಿನ 880 ಮೀ ಉದ್ದದ ಅಲೆತಡೆಗೋಡೆ ನಿರ್ಮಾಣ ಕಾಮಗಾರಿಯನ್ನು ವಿರೋಧಿಸಿ ಕಾರವಾರ ತಾಲೂಕಿನ ಬೈತಕೋಲ ಬಂದರು ನಿರಾಶ್ರಿತರ ಯಾಂತ್ರೀಕೃತ ದೋಣಿ ಮೀನುಗಾರರ ಸಹಕಾರ ಸಂಘ ನಿಯಮಿತ, ಬೈತಕೋಲರವರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಪೀಠದಲ್ಲಿ ರಿಟ್ ಪಿಟಿಷನ್ ನಂ 1332/2020 ರಂತೆ ಸಾರ್ವಜನಿಕ ಹಿತಾಸಕ್ತಿ ಪ್ರಕರಣ ದಾಖಲಿಸಿದ್ದು ಪ್ರಸ್ತುತ ಸದರಿ ಪ್ರಕರಣವು ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು, ಇಲ್ಲಿ ವಿಚಾರಣಾ ಹಂತದಲ್ಲಿದೆ. |

ಲೋಇ 43 ಪಿಎಸ್‌ಪಿ 2020(ಇ)

**(ಕೋಟಾ ಶ್ರೀನಿವಾಸ ಪೂಜಾರಿ)**

ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ

ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು